ತ್ವಂ ಮಮ ತೇಜೋಂಶ ಸಂಭವಂ.'' ಹಾಗೆ ನೋಡಬೇಕೆನ್ನುವವರಿಗೆ ರಾಮಾಯಣವೇ ವೇದ; ರಾಮಚಂದ್ರನು ದೇವರು.

## ೧೬

## ವಂದೇ ವಾಲ್ಮೀಕಿ ಕೋಕಿಲಂ

ವಾಲ್ಮೀಕಿ ಯೋಗ್ಯತೆಯಿಂದಲೂ ಭರತವರ್ಷದ ಆದಿಕವಿಯೆಂದು ಹೇಳಿ ಈ ವ್ಯಾಖ್ಯಾನವನ್ನು ಆರಂಭಿಸಿತು. ಇದುವರೆಗೆ ಹೇಳಿದ ಮಾತೆಲ್ಲ ಆ ಸೂತ್ರಕ್ಕೆ ವೃತ್ತಿ ಮಾತ್ರ. ವಾಲ್ಮೀಕಿ ಹಿರಿಯನೆನ್ನುವುದು ಹೊಸ ಮಾತಲ್ಲ; ಆದರೆ ಹೊಸ ಕಾಲದ ಪ್ರಪಂಚ ಜೀವನದಲ್ಲಿ, ಎಲ್ಲ ದೇಶಗಳ ಗ್ರಂಥಗಳು ನಮ್ಮ ಕೈಯಲ್ಲಿ ಓಡಾಡುವ ಈ ಕಾಲದಲ್ಲಿ, ನಮ್ಮ ಜನರಿಗೆ ರಾಮಾಯಣದ ನಿಜವಾದ ಪರಿಚಯ ಕಡಮೆಯಾಗುವುದು ಆಶ್ಚರ್ಯವಲ್ಲ. ಹಿಂದಣ ಉಪೋದ್ಘಾತಕಾರನು ಕವಿಯನ್ನೂ ಕಾವ್ಯವನ್ನೂ ಹೊಗಳಿದನು. ''ತದುಪಗತ ಸಮಾಸ ಸಂಧಿಯೋಗಂ ಸಮಮಧುರೋಪನತಾರ್ಥ ವಾಕ್ಯಬದ್ಧಂ, ರಘುವರಚರಿತಂ ಮುನಿಪ್ರಣೀತಂ, ದಶಶಿರಸಶ್ಚ ವಧಂ ನಿಶಾಮಯಧ್ವಂ'' ಎಂದು ಹೇಳಿದನು. ''ಉದಾರ ವೃತ್ತಾರ್ಥ ಪದೈಃ ಮನೋರಮೈಃ ಸಮಾಕ್ಷರೈಃ ಶ್ಲೋಕ ಶತೈಃ ಉದಾರ ಧೀಃ ಮುನಿಃ ಚಕಾರ ಕಾವ್ಯಂ'' ಎಂದನು. ''ವಾಲ್ಮೀಕಿಗಿರಿ ಸಂಭೂತಾ ರಾಮಸಾಗರ ಗಾಮಿನೀ ಪುನಾತಿ ಭುವನಂ ಪುಣ್ಯಾ ರಾಮಾಯಣ ಮಹಾನದೀ'' ಎಂದೂ ''ವೇದವೇದ್ಯೇ ಪರೇಪುಂಸಿ ಜಾತೇ ದಶರಥಾತ್ಮಜೇ ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ'' ಎಂದೂ ಇತರರು ಹೇಳಿದರು. ಭರತ ಲಕ್ಷ್ಮಣರನ್ನು ಸೋದರರಾಗಿ ಸೀತೆಯನ್ನು ಪತ್ನಿಯಾಗಿ ಹನುಮಂತನನ್ನು ಸೇವಕನಾಗಿ ಪಡೆದ ರಾಮನ ಪುಣ್ಯ ವಾಲ್ಮೀಕಿಯನ್ನು ಅವನ ಕವಿಯಾಗಿ ಮಾಡಿ ಅವನಿಗೆ ಕಳಸವನ್ನಿಟ್ಟಿತು. ಆ ಕಳಸ ಈಗ ಭರತವರ್ಷದ್ದಾಗಿದೆ. ಹೊರಗಿನದನ್ನು ಎಷ್ಟೇ ತಂದುಕೊಂಡರೂ ನಾವು ವಾಲ್ಮೀಕಿಯನ್ನು ಬಿಡಲಾಗದು; ಪ್ರಾಯಶಃ ಬಿಡಲಾರೆವು. ವಾಲ್ಮೀಕಿಯ ಸಲುವಾಗಿ ನಮ್ಮ ದೇಶಕ್ಕೆ ಮರ್ಯಾದೆ ದೊರೆತಿದೆ. ಎಲ್ಲವನ್ನೂ ಕಳೆದುಕೊಂಡಿರುವ ನಮಗೆ ಇವನೂ ಇವನ

ಜೊತೆಯ ಹಿರಿಯರೂ ಆಸ್ತಿಯಾಗಿ ಉಳಿದಿದ್ದಾರೆ. ಮುಂದಕ್ಕೆ ನಮಗೆ ಶುಭವಾಗುವುದು ಎಂಬ ಧೈರ್ಯಕ್ಕೆ ಇವನೂ ಇವನ ಜೊತೆಯವರೂ ಕಾರಣ. ಹೋಮರನ ಜನ ಈಗ ಇಲ್ಲ; ಅವನು ವರ್ಣಿಸಿದ ನಂಬಿಕೆ, ನಾಗರಿಕತೆ ಅಳಿಸಿಹೋದವು. ವರ್ಜಿಲನ ಸ್ಥಿತಿಯಾದರೂ ಇದೇ ಆಗಿದೆ. ಡಾಂಟೆ ಕ್ಯಾಥೊಲಿಕ್ ಕ್ರೈಸ್ತ ಮತದ ಕವಿ ಹೌದು; ಆದರೆ ಆ ಮತದಲ್ಲಿ ಅವನ ಕಾವ್ಯಕ್ಕೆ ಸನಾತನಧರ್ಮದಲ್ಲಿ ರಾಮಾಯಣಕ್ಕೆ ದೊರೆತ ಪದವಿ ದೊರೆಯಲಿಲ್ಲ. ಮಿಲ್ಟನ್ ಬರೆದ ಕೃತಿ ಅವನ ಕಾಲಕ್ಕೇ ಬರಿಯದೊಂದು ಕಾವ್ಯ; ಅದು ಒಂದು ಜನತೆಯ ಬಾಳಿನಲ್ಲಿ ರಾಮಾಯಣ ಇಲ್ಲಿ ಬೆರೆತಿರುವಂತೆ ಬೆರೆಯುವ ಪುಣ್ಯವನ್ನು ಪಡೆಯಲಿಲ್ಲ. ಈಗಣ ಪ್ರಪಂಚದಲ್ಲಿ ಈ ಅನುಪಮಸ್ಥಾನ ಉಳಿದಿರುವುದು ಈ ಒಂದು ಕಾವ್ಯಕ್ಕೇ. ವಾಲ್ಮೀಕಿ ಸನಾತನಧರ್ಮದ ಕವಿಕೋಕಿಲ. ಅವನು ಪಂಡಿತರಿಗೆ ಹಿರಿಯನು, ಪಾಮರರಿಗೆ ಪ್ರಿಯನು. ಜನದ ಮನಸ್ಸಿನಲ್ಲಿ ಅವನು ಪ್ರತಿಷ್ಠೆಮಾಡಿದ ರಾಮನಾಮ ಈಗಲೂ ಅದರ ನಾಲಿಗೆಯಲ್ಲಿ ನಲಿಯುತ್ತಿದೆ. "ರಘುಪತಿ ರಾಘವ ರಾಜಾರಾಂ ಪತಿತಪಾವನ ಸೀತಾರಾಂ." ರಾಮ ರಾಮ ಎಂಬ ಕೂಗು ರಾಮನು ರಾಜನಾಗಿದ್ದ ಕಾಲದಲ್ಲಿ ಆರಂಭಿಸಿತಂತೆ; ಅದು ಎಂದು ಎಂಬದನ್ನು ನಿರ್ಧರವಾಗಿ ಹೇಳುವಂತಿಲ್ಲ. ಅಷ್ಟು ಹಿಂದೆ ಆರಂಭಿಸಿದ ಆ ಕೂಗು ಈಗಲೂ ಕೇಳಿಸುತ್ತಿದೆ; ಒಳ್ಳೆಯದೆನ್ನುವುದರಲ್ಲಿ ಗೌರವವಿರುವಷ್ಟು ದಿನವೂ ಕೇಳಿಸುತ್ತಲೇ ಇರಬೇಕು. ರಾಮಾಯಣ ನಿತ್ಯಕಾಲದ ಕಾವ್ಯ. ಅದರ ಉಪಾಸಕನೊಬ್ಬನು ಹೇಳಿದಂತೆ "ಯಾವತ್ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ತಾವದ್ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ." ಇಂಥ ಕಾವ್ಯವನ್ನು ರಚಿಸಿದ ವಾಲ್ಮೀಕಿಯನ್ನು ಅನಂತ ಕಾಲವು ಕವಿ ಕುಲದ ಗುರುವೆಂದು, ದೊರೆಯೆಂದು, ಹಿರಿಯನೆಂದು ವಂದಿಸುತ್ತಲೇ ಇರುತ್ತದೆ. ಆ ವಂದನೆ ಶ್ರೇಯಸ್ಕರ; ಅದರಲ್ಲಿ ನಮ್ಮ ಜನಾಂಗವೆಲ್ಲ ಸೇರಬೇಕು; ಇತರರನ್ನು ಸೇರಿಸಿಕೊಳ್ಳಬೇಕು. "ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ ಆರುಹ್ಯ ಕವಿತಾ ಶಾಖಾಂ ವಂದೇ ವಾಲ್ಮೀಕಿ ಕೋಕಿಲಂ."

---

1570–55. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ ಸಿ. ವಾಸುದೇವರಾಯರವರು ಮುದ್ರಿಸಿರುವರು.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ಸುಬ್ಬಣ್ಣ (ಕತೆ)
ವಿಮರ್ಶೆ ೧, ೨, ೩, ೪ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೪, ೫, ೬
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ಣಾಟಕದ ಜನಪದಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯು ತಮ್ಮಡಿ (ಭಾಷಣ)
ನವರಾತ್ರಿ ೧, ೨, ೩, ೪, ೫ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವನಾಯಕ (ಕಾದಂಬರಿ)
ಮನವಿ (ಗೀತೆಗಳು)
ಪೂಜನ (ಮುನ್ನುಡಿಗಳ ಸಂಕಲನ)
ಚಿಂತನ (ವಿಚಾರ)
ಮಾಸತಿ (ದೃಶ್ಯ)
ಅನಾರ್ಕಳಿ ,,

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು
ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು
ಬೆಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ
ಸಾಹಿತ್ಯ ಭಾಂಡಾರ, ಹುಬ್ಬಳ್ಳಿ
ಕನ್ನಡ ಬುಕ್ ಡಿಪೋ, ಈಸಾಮಿಯಾ ಬಜಾರ್, ಹೈದರಾಬಾದ್